6

(12)

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 28 (237+ 236)

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ನಿರಾಣಿ ಹಣವಂತ್ ರುದ್ರಪ್ಪ (ಪದವಿಧರರ ಕ್ಷೇತ್ರ) ಹಾಗೂ ಶ್ರೀ ಅರುಣ ಶಹಾಪೂರ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 14.12.2021

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿನ ವಿಕಲಚೇತನರಿಗೆ ಇಲಾಖೆಯ ವತಿಯಿಂದ ರೂಪಿಸಿದ ಯೋಜನೆಗಳಾವವು; ಕೈಗೊಂಡಿರುವ ಅಭಿವೃದ್ಧಿ ಕಾರ್ಯಗಳಾವುವು; ಎಷ್ಟು ಯೋಜನೆಗಳು ಅನುಷ್ಠಾನಗೊಂಡಿಲ್ಲ; (ವಿವರ ನೀಡುವುದು) | ರಾಜ್ಯದಲ್ಲಿನ ವಿಕಲಚೇತನರಿಗೆ ಇಲಾಖಾ ವತಿಯಿಂದ ರೂಪಿಸಿದ ಯೋಜನೆಗಳ ಹಾಗೂ ಅಭಿವೃದ್ಧಿ ಕಾರ್ಯಗಳ ಬಗ್ಗೆ ಮಾಹಿತಿಯನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ. ಎಲ್ಲಾ ಯೋಜನೆಗಳು ಅನುಷ್ಠಾನಗೊಳ್ಳುತ್ತಿವೆ. |
| ಆ | ಕಳೆದ 03 ವರ್ಷಗಳಲ್ಲಿ ಸರ್ಕಾರದಿಂದ ವಿಕಲಚೇತನರ ಅಭಿವೃದ್ಧಿಗೆ ಮಂಜೂರಾದ ಅನುದಾನ ಎಷ್ಟು; ಇಲ್ಲಿಯವರೆಗೆ ಬಳಕೆಯಾದ ಅನುದಾನ ಎಷ್ಟು ಬಳಕೆಯಾಗದ ಅನುದಾನ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ವಿಕಲಚೇತನರ ಅಭಿವೃದ್ಧಿಗೆ ಮಂಜೂರಾದ, ಬಳಕೆಯಾದ ಹಾಗೂ ಬಳಕೆಯಾಗದ ಅನುದಾನ ಕೆಳಕಂಡಂತಿದೆ. (ರೂ. ಲಕ್ಷಗಳಲ್ಲಿ) (ಕೆಳಗಿನ ಕೋಷ್ಟಕ ನೋಡಿ) ಈ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಅನುಬಂಧ-02ರಲ್ಲಿ ಲಗತ್ತಿಸಿದೆ. |
| ಇ | ಗ್ರಾಮಾಂತರ ಪ್ರದೇಶದ ವಿಕಲಚೇತನರಿಗೆ ಪರಿಣಾಮಕಾರಿಯಾಗಿ ಸೌಲಭ್ಯವನ್ನು ಕಲ್ಪಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; ವಿಕಲಚೇತನರಿಗಾಗಿ ರೂಪಿಸಿರುವ ಈಗಿನ ಮತ್ತು ಮುಂದಿನ ಯೋಜನೆಗಳಾವುವು. | • ಗ್ರಾಮಾಂತರ ಪ್ರದೇಶದ ವಿಕಲಚೇತನರಿಗೆ ಪರಿಣಾಮಕಾರಿಯಾಗಿ ಇಲಾಖಾ ಸೌಲಭ್ಯಗಳನ್ನು ತಲುಪಿಸಲು ಗ್ರಾಮಮಟ್ಟದಲ್ಲಿ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು, ತಾಲ್ಲೂಕು ಮಟ್ಟದಲ್ಲಿ ವಿವಿದ್ದೋದ್ದೇಶ ಪುನರ್ವಸತಿ ಕಾರ್ಯಕರ್ತರನ್ನು ನೇಮಿಸಿದ್ದು, ಇವರುಗಳ ಮುಖಾಂತರ ಇಲಾಖಾ ಸೌಲಭ್ಯಗಳನ್ನು ವಿಕಲಚೇತನರಿಗೆ ಅವರುಗಳು ವಾಸಿಸುವ ಸ್ಥಳದಲ್ಲಿಯೇ ಒದಗಿಸಲು ಕ್ರಮವಹಿಸಲಾಗಿದೆ.<br>• ವಿಕಲಚೇತನರಿಗಾಗಿ ರೂಪಿಸಿರುವ ಈಗಿನ ಮತ್ತು ಮುಂದಿನ ಯೋಜನೆಗಳನ್ನು ಅನುಬಂಧ-03ರಲ್ಲಿ ಒದಗಿಸಲಾಗಿದೆ. |

| ವರ್ಷ | ಮಂಜೂರಾದ ಅನುದಾನ | ಬಳಕೆಯಾದ ಅನುದಾನ | ಬಳಕೆಯಾಗದ ಅನುದಾನ |
|---|---|---|---|
| 2018-19 | 126001.22 | 119914.69 | 6086.53 |
| 2019-20 | 19546.25 | 15999.54 | 3546.71 |
| 2020-21 | 19938.31 | 16780.88 | 3157.43 |

| | | |
|---|---|---|
| ಈ | ಅಂಗವಿಕಲರಿಗಾಗಿ ಶಾಸಕರ ಅನುದಾನದಿಂದ ತ್ರಿಚಕ್ರ ವಾಹನಗಳನ್ನು ನೀಡುವ ಯೋಜನೆಯು ಜಾರಿಯಲ್ಲಿದೆಯೇ; ಇದರ ಜೊತೆಗೆ ಹೊಸ ಹೊಸ ಯೋಜನೆಗಳನ್ನು ಶಾಸಕರ ಅನುದಾನದಿಂದ ಒದಗಿಸಲು ಸರ್ಕಾರವು ಚಿಂತಿಸಿದೆಯೇ; | ಹೌದು.<br><br>ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಅಂಗವಿಕಲರಿಗಾಗಿ ತ್ರಿ ಚಕ್ರ ವಾಹನಗಳನ್ನು ನೀಡಲು ಅವಕಾಶ ಕಲ್ಪಿಸಿದ್ದು, ಪ್ರಾರಂಭದಲ್ಲಿ ವಾರ್ಷಿಕ ರೂ.10.00 ಲಕ್ಷಗಳನ್ನು ವೆಚ್ಚ ಮಾಡಲು ಅವಕಾಶ ಕಲ್ಪಿಸಿದ್ದು, ಪ್ರಸ್ತುತ ಸರ್ಕಾರದ ಆದೇಶ ಸಂಖ್ಯೆ:ಯೋಇ 174 ಯೋವಿವಿ 2016, ದಿನಾಂಕ:14.03.2017ರಲ್ಲಿ ರೂ.20.00 ಲಕ್ಷಗಳಿಗೆ ಹೆಚ್ಚಿಸಿ ಆದೇಶಿಸಲಾಗಿದೆ. |
| ಉ | ಸ್ವಯಂ ಉದ್ಯೋಗಕ್ಕಾಗಿ ಅನುದಾನ ಒದಗಿಸುವಿಕೆ, ಮಹಿಳೆಯರಿಗಾಗಿ ಗೃಹ ಉದ್ಯೋಗಗಳನ್ನು ಕಲ್ಪಿಸುವ ಯೋಜನೆಗಳು, ಟೈಲರಿಂಗ್ ಇತ್ಯಾದಿ ಸ್ವಾವಲಂಬಿ ಜೀವನವನ್ನು ನಡೆಸಲು ಶಾಸಕರ ಅನುದಾನವನ್ನು ಒದಗಿಸುವ ಯೋಜನೆ ಸರ್ಕಾರದ ಮುಂದೆ ಇದೆಯೇ; ಇದ್ದಲ್ಲಿ ಅದರ ಮಾಹಿತಿಯನ್ನು ಒದಗಿಸುವುದು. | ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಡಿ ವಿಕಲಚೇತನರಿಗೆ ಸ್ವಯಂ ಉದ್ಯೋಗಕ್ಕಾಗಿ ಆಧಾರ ಯೋಜನೆಯಡಿ ಸಾಲ ಸೌಲಭ್ಯವನ್ನು ಹಾಗೂ ಹೊಲಿಗೆ ಯಂತ್ರಗಳನ್ನು ಇಲಾಖೆಯಡಿ ಒದಗಿಸಲಾಗುತ್ತಿದೆ.<br><br>ಸ್ವಯಂ ಉದ್ಯೋಗಕ್ಕಾಗಿ ಅನುದಾನ ಒದಗಿಸುವಿಕೆ, ಮಹಿಳೆಯರಿಗಾಗಿ ಗೃಹ ಉದ್ಯೋಗಗಳನ್ನು ಕಲ್ಪಿಸುವ ಯೋಜನೆಗಳು, ಟೈಲರಿಂಗ್ ಇತ್ಯಾದಿ ಸ್ವಾವಲಂಬಿ ಜೀವನವನ್ನು ನಡೆಸಲು ಶಾಸಕರ ಅನುದಾನವನ್ನು ಒದಗಿಸುವ ಯಾವುದೇ ಯೋಜನೆ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ: ಮಮಇ 263 ಪಿಹೆಚ್‌ಪಿ 2021

Halappa B

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ ಹಾಗೂ ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.

## ಅನುಬಂಧ-01

### ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಿಂದ ವಿಕಲಚೇತನರಿಗಾಗಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು

(ಎ) **ಶೈಕ್ಷಣಿಕ ಯೋಜನೆಗಳು:-**

**1) ಶ್ರವಣದೋಷವುಳ್ಳ ಮಕ್ಕಳಿಗಾಗಿ ಸರ್ಕಾರದ ವಸತಿಯುತ ಶಾಲೆಗಳು:**

- ಶ್ರವಣದೋಷವುಳ್ಳ ಮಕ್ಕಳಿಗಾಗಿ ಮೈಸೂರು, ಕಲಬುರ್ಗಿ, ಬಳ್ಳಾರಿ, ಬೆಳಗಾವಿ ಜಿಲ್ಲೆಗಳಲ್ಲಿ 4 ಕಿವುಡು ಮಕ್ಕಳ ವಸತಿ ಶಾಲೆಗಳನ್ನು ಇಲಾಖಾವತಿಯಿಂದ ನಡೆಸಲಾಗುತ್ತಿದೆ.ಈ ಶಾಲೆಗಳಲ್ಲಿ ಮಕ್ಕಳಿಗೆ ಉಚಿತ ವಸತಿ, ಊಟ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ.ಈ ಪೈಕಿ ಶ್ರವಣದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ಬೆಳಗಾವಿಯಲ್ಲಿ ಪ್ರತ್ಯೇಕ ವಸತಿ ಶಾಲೆ ಇರುತ್ತದೆ. ಇತ್ತೀಚೆಗೆ ಬೆಂಗಳೂರಿನಲ್ಲಿ ಶ್ರವಣದೋಷವುಳ್ಳ ಮಕ್ಕಳ ಶಾಲೆಯನ್ನು ಸರ್ಕಾರದಿಂದ ನಡೆಸಲಾಗುತ್ತಿದೆ.

**2. ಅಂಧ ಮಕ್ಕಳಿಗಾಗಿ ಸರ್ಕಾರದ ವಸತಿಯುತ ಶಾಲೆಗಳು:**

ಅಂಧ ಮಕ್ಕಳಿಗಾಗಿ ಕಲಬುರ್ಗಿ, ಮೈಸೂರು, ದಾವಣಗೆರೆ ಹಾಗೂ ಹುಬ್ಬಳ್ಳಿಯಲ್ಲಿ ವಿಶೇಷ ಶಾಲೆಗಳನ್ನು ನಡೆಸಲಾಗುತ್ತಿದೆ.ಈ ಶಾಲೆಗಳಲ್ಲಿ ದೃಷ್ಟಿದೋಷವುಳ್ಳ ಮಕ್ಕಳಿಗೆ ಉಚಿತ ಊಟ, ವಸತಿ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ.ಈ ಪೈಕಿ ದೃಷ್ಟಿದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ದಾವಣಗೆರೆಯಲ್ಲಿ ಪ್ರತ್ಯೇಕ ವಸತಿ ಶಾಲೆ ಇರುತ್ತದೆ.

**3. 1982ರ ರಾಜ್ಯ ಅನುದಾನ ಸಂಹಿತೆಯಡಿ ನಡೆಯುತ್ತಿರುವ ವಿಶೇಷ ಶಾಲೆಗಳು:**

1982ರ ರಾಜ್ಯ ಅನುದಾನ ಸಂಹಿತೆಯಡಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ 34 ವಿಶೇಷ ಶಾಲೆ/ ತರಬೇತಿ ಕೇಂದ್ರಗಳನ್ನು ದೈಹಿಕ, ಅಂಧ, ಶ್ರವಣದೋಷ ಹಾಗೂ ಬುದ್ಧಿಮಾಂದ್ಯ ಮಕ್ಕಳಿಗಾಗಿ ನಡೆಸಲಾಗುತ್ತಿದೆ.ರಾಜ್ಯ ಸರ್ಕಾರದಿಂದ ಅನುದಾನವನ್ನು ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಲಾಗುತ್ತಿದೆ.

**4. ವಿಕಲಚೇತನರಿಗೆ ವೃತ್ತಿ ತರಬೇತಿ ಕೇಂದ್ರಗಳು:**

ಈ ಯೋಜನೆಯಡಿ ವಿವಿಧ ರೀತಿಯ ವಿಕಲಚೇತನರಿಗೆ ವೃತ್ತಿ ತರಬೇತಿಯನ್ನು ನೀಡುವುದಾಗಿದೆ. 1982ರ ರಾಜ್ಯ ಅನುದಾನ ಸಂಹಿತೆಯಡಿ 5 ವೃತ್ತಿ ತರಬೇತಿ ಕೇಂದ್ರಗಳನ್ನು ರಾಜ್ಯ ಸಹಾಯಾನುದಾನದಡಿ ಬೆಂಗಳೂರಿನಲ್ಲಿ 03 ಮತ್ತು ಮೈಸೂರಿನಲ್ಲಿ 02 ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ವಾಕ್ ಶ್ರವಣ ಕೇಂದ್ರವನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದೆ. ವೃತ್ತಿ ತರಬೇತಿ ಕೇಂದ್ರಗಳಲ್ಲಿ ವಿವಿಧ ರೀತಿಯ ವಿಕಲಚೇತನರಿಗೆ ಫಿಟ್ಟರ್, ಟರ್ನರ್, ಸರಳ ಇಂಜಿನಿಯರಿಂಗ್, ಬೆತ್ತ, ಹಗ್ಗ, ಚಾಪೆ ಹೆಣೆಯುವುದು ಹಾಗೂ ಪ್ಲಾಸ್ಟಿಕ್ ಮೌಲ್ಡಿಂಗ್ ತರಬೇತಿಯನ್ನು ನೀಡಲಾಗುತ್ತಿದೆ.ಪ್ರತಿ ತರಬೇತಿ ಕೇಂದ್ರದಲ್ಲಿ ವಾರ್ಷಿಕ 25 ಫಲಾನುಭವಿಗಳು ತರಬೇತಿ ಪಡೆಯಲು ಅವಕಾಶವಿರುತ್ತದೆ.

**5. ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ ನಡೆಯುತ್ತಿರುವ ವಿಶೇಷ ಶಾಲೆಗಳು:**

ಈ ಯೋಜನೆಯಡಿ ಬುದ್ದಿಮಾಂದ್ಯ (ಸೆರಬ್ರಲ್ ಪಾಲ್ಸಿ, ಆಟಿಸಂ), ದೃಷ್ಟಿದೋಷ, ಶ್ರವಣದೋಷವುಳ್ಳ ಮಕ್ಕಳಿಗಾಗಿ ವಸತಿಯುತ ಹಾಗೂ ವಸತಿರಹಿತ ಶಾಲೆಗಳು ಸೇರಿದಂತೆ ಒಟ್ಟು 141 ವಿಶೇಷ ಶಾಲೆಗಳು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಯುತ್ತಿವೆ. ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಶ್ರವಣದೋಷವುಳ್ಳ ಹಾಗೂ ದೃಷ್ಟಿದೋಷವುಳ್ಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6200/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.5200/- ರಂತೆ ಹಾಗೂ ಬುದ್ದಿಮಾಂದ್ಯ ಮಕ್ಕಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6800/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ. 6000/- ರಂತೆ ವರ್ಷದಲ್ಲಿ 10 ತಿಂಗಳ ಅವಧಿಗೆ ಅನುದಾನವನ್ನು ಮಂಜೂರು ಮಾಡಲಾಗುತ್ತಿದೆ.ಈ ಅನುದಾನದಲ್ಲಿ ಶಿಕ್ಷಕರ ಗೌರವಧನ, ಮಕ್ಕಳ ಆಹಾರ ವೆಚ್ಚ, ಕಟ್ಟಡದ ಬಾಡಿಗೆ ಹಾಗೂ ನಿರ್ವಹಣಾ ವೆಚ್ಚ, ಸಮವಸ್ತ್ರ, ವೈದ್ಯಕೀಯ ವೆಚ್ಚ ಹಾಗೂ ಸಾದಿಲ್ವಾರು ವೆಚ್ಚಗಳು ಒಳಗೊಂಡಿರುತ್ತವೆ.

6. ಕೇಂದ್ರ ಸರ್ಕಾರದ ದೀನ್‌ದಯಾಳ್ ಪುನರ್ವಸತಿ ಯೋಜನೆಯಡಿ 8 ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವಿಶೇಷ ಶಾಲೆ /ವೃತ್ತಿ ತರಬೇತಿ ಕೇಂದ್ರಗಳು ನಡೆಯುತ್ತಿದ್ದು, ಸದರಿ ಶಾಲೆ ಹಾಗೂ ತರಬೇತಿ ಕೇಂದ್ರಗಳಿಗೆ ಕೇಂದ್ರ ಸರ್ಕಾರದಿಂದ ಶೇ.90ರಷ್ಟು ಅನುದಾನವನ್ನು ಮಂಜೂರು ಮಾಡಲಾಗುತ್ತಿದ್ದು, ಉಳಿದ ಶೇ.10ರಷ್ಟು ವೆಚ್ಚವನ್ನು ಸಂಸ್ಥೆಯವರು ಭರಿಸಬೇಕಾಗಿರುತ್ತದೆ.

**7. ಅಂಗವಿಕಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹಧನ:**

ಈ ಯೋಜನೆಯಡಿ ಒಂದನೇ ತರಗತಿಯಿಂದ ಸ್ನಾತಕೋತ್ತರ ಪದವಿಯವರೆಗೆ ವ್ಯಾಸಂಗ ಮಾಡುತ್ತಿರುವ ಅರ್ಹ ವಿಕಲಚೇತನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಆಯಾ ಜಿಲ್ಲಾ ಕಛೇರಿಗಳ ಮೂಲಕ ಮಂಜೂರು ಮಾಡಲಾಗುತ್ತಿದೆ. 2001-02ನೇ ಸಾಲಿನಿಂದ ಈ ಯೋಜನೆಯ ಫಲಾನುಭವಿಗಳಿಗೆ ಆದಾಯ ಮಿತಿಯಿಂದ ವಿನಾಯಿತಿಗೊಳಿಸಲಾಗಿದೆ.

**8. ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ಯೋಜನೆ:**

ಸಾರ್ವತ್ರಿಕ ಪರೀಕ್ಷೆಗಳಲ್ಲಿ ಶೇಕಡ 60 ಕ್ಕಿಂತಲೂ ಹೆಚ್ಚಿನ ಅಂಕಗಳನ್ನು ಪಡೆದ ಪ್ರತಿಭಾನ್ವಿತ ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ನೀಡುವ ಯೋಜನೆ ಇದಾಗಿದೆ.ಈ ಯೋಜನೆಯನ್ನು 2001-02ನೇ ಸಾಲಿನಿಂದ ಬಿ.ಎಡ್, ಎಂ.ಎಡ್. ಮತ್ತು ಟಿ.ಸಿ.ಹೆಚ್. ವಿದ್ಯಾರ್ಥಿಗಳಿಗೂ ವಿಸ್ತರಿಸಲಾಗಿದೆ.

**9. ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ:**

ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ, ಔದ್ಯೋಗಿಕ ಶಿಕ್ಷಣಗಳಿಗೆ ನಿಯಮಾನುಸಾರ ಆಯ್ಕೆಯಾಗುವ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿಪಡಿಸಿರುವ ಪರೀಕ್ಷಾ ಶುಲ್ಕ ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸುವ

ಯೋಜನೆಯನ್ನು 2013-14ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯಮಿತಿ ಇರುವುದಿಲ್ಲ.

**10. ಬ್ರೈಲ್ ಮುದ್ರಣಾಲಯ:**

ರಾಜ್ಯಾದ್ಯಂತ ವಿಶೇಷ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ದೃಷ್ಟಿದೋಷವುಳ್ಳ ಮಕ್ಕಳಿಗೆ ಬ್ರೈಲ್ ಪುಸ್ತಕಗಳನ್ನು ಉಚಿತವಾಗಿ ನೀಡಲು ಮೈಸೂರಿನಲ್ಲಿರುವ ಬ್ರೈಲ್ ಮುದ್ರಣಾಲಯದಲ್ಲಿ ಮುದ್ರಿಸಿ ಸರಬರಾಜು ಮಾಡಲಾಗುತ್ತಿದೆ.

11. **ವಿಶೇಷ ಶಿಕ್ಷಣ ತರಬೇತಿ ಕೇಂದ್ರ ಯೋಜನೆ:**

ದೃಷ್ಟಿದೋಷವುಳ್ಳ ಹಾಗೂ ಶ್ರವಣದೋಷವುಳ್ಳ ವಿದ್ಯಾರ್ಥಿಗಳಿಗೆ ಬೋಧಿಸುವ ಶಿಕ್ಷಕರಿಗೆ ವಿಶೇಷ ಶಿಕ್ಷಣ ನೀಡಲು ತಲಾ ಒಂದರಂತೆ ವಿಶೇಷ ಶಿಕ್ಷಕರ ತರಬೇತಿ ಕೇಂದ್ರವನ್ನು ಮೈಸೂರಿನಲ್ಲಿ ನಡೆಸುತ್ತಿದ್ದು, ಪ್ರತಿ ವರ್ಷ ಪ್ರತಿ ಕೇಂದ್ರದಲ್ಲಿ 25 ಪ್ರಶಿಕ್ಷಣಾರ್ಥಿಗಳು ತರಬೇತಿ ಪಡೆಯಲು ಅವಕಾಶವಿರುತ್ತದೆ.

**12. ಮಾನಸಿಕ ಅಸ್ವಸ್ಥ, ಸೆರಬ್ರಲ್ ಪಾಲ್ಸಿ, ಆಟಿಸಂ ಮಕ್ಕಳ ಹಗಲು ಯೋಗಕ್ಷೇಮ ಕೇಂದ್ರಗಳು:**

ಸೆರಬ್ರಲ್ ಪಾಲ್ಸಿ, ಆಟಿಸಂ, ಮಾನಸಿಕ ಅಸ್ವಸ್ಥ ಹಾಗೂ ತೀವ್ರತರದ ಅಂಗವೈಕಲ್ಯತೆ ಹೊಂದಿರುವ ಮೂರರಿಂದ 25 ವರ್ಷದ ಒಳಗಿನ ಮಕ್ಕಳಿಗಾಗಿ 02 ಹಗಲು ಯೋಗಕ್ಷೇಮ ಕೇಂದ್ರಗಳನ್ನು ಬೆಂಗಳೂರು ನಗರ ಜಿಲ್ಲೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸುತ್ತಿದ್ದು, ಪ್ರತಿ ಕೇಂದ್ರದಲ್ಲಿ 25 ಮಕ್ಕಳನ್ನು ದಾಖಲಿಸಲು ಅವಕಾಶವಿದ್ದು, ಪ್ರತಿ ಮಗುವಿಗೆ ಮಾಸಿಕ ರೂ.10,000/-ಗಳಂತೆ ವಾರ್ಷಿಕ 25.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.

**(ಬಿ) ಉದ್ಯೋಗ ಮತ್ತು ತರಬೇತಿ:**

**1. ಅಂಗವಿಕಲ ಪುರುಷ ಹಾಗೂ ಮಹಿಳೆಯರ ವಸತಿನಿಲಯ:**

ಬೆಂಗಳೂರಿನಲ್ಲಿ ವಿಕಲಚೇತನ ಮಹಿಳೆ ಮತ್ತು ವಿಕಲಚೇತನ ಪುರುಷರಿಗಾಗಿ ಅಂಗವಿಕಲ ಉದ್ಯೋಗಸ್ಥ ನೌಕರರು ಮತ್ತು ಪ್ರಶಿಕ್ಷಣಾರ್ಥಿಗಳಿಗಾಗಿ ಮಹಿಳೆಯರು ಹಾಗೂ ಪುರುಷರಿಗಾಗಿ ಪ್ರತ್ಯೇಕವಾದ ವಸತಿ ನಿಲಯವನ್ನು ನಡೆಸಲಾಗುತ್ತಿದೆ. ಪ್ರಸ್ತುತ ಈ ಎರಡೂ ವಸತಿ ನಿಲಯಗಳು ಬೆಂಗಳೂರಿನ ಕೆಂಗೇರಿಯಲ್ಲಿ ನಡೆಯುತ್ತಿವೆ. ಪ್ರತಿ ವಸತಿ ನಿಲಯದಲ್ಲಿ 50 ನಿವಾಸಿಗಳನ್ನು ದಾಖಲಿಸಲು ಅವಕಾಶವಿರುತ್ತದೆ.

**2. ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ವಸತಿ ನಿಲಯಗಳು:**

ಅಂಗವಿಕಲ ಉದ್ಯೋಗಸ್ಥ ಮಹಿಳೆಯರಿಗಾಗಿ ಹಾಗೂ ವಿದ್ಯಾರ್ಥಿನಿ/ತರಬೇತಿದಾರರಿಗೆ ಸ್ವಯಂ ಸೇವಾ ಸಂಸ್ಥೆಗಳ ಮೂಲಕ 25 ಜಿಲ್ಲೆಗಳಲ್ಲಿ ಮಹಿಳಾ ವಸತಿ ನಿಲಯಗಳು (ಬೆಂಗಳೂರು ನಗರ ಜಿಲ್ಲೆಯಲ್ಲಿ 4 ವಸತಿ ನಿಲಯಗಳು) ನಡೆಯುತ್ತಿವೆ. ಸದರಿ ವಸತಿ ನಿಲಯದಲ್ಲಿ ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ಮತ್ತು ವಿದ್ಯಾರ್ಥಿನಿಯರಿಗೆ ಹಾಗೂ ತರಬೇತಿದಾರರಿಗೆ ವಸತಿ ಸೌಲಭ್ಯವನ್ನು ಕಲ್ಪಿಸಿದ್ದು, ವಿದ್ಯಾರ್ಥಿನಿಯರು ಹಾಗೂ ತರಬೇತಿದಾರರಿಗೆ ಮಾತ್ರ ಉಚಿತ ಊಟದ ವ್ಯವಸ್ಥೆ ಇರುತ್ತದೆ.

**3. ಗ್ರಾಮೀಣ ಪುನರ್ವಸತಿ ಯೋಜನೆ:**

ಈ ಯೋಜನೆಯನ್ನು ರಾಜ್ಯದ ಎಲ್ಲಾ 30 ಜಿಲ್ಲೆಗಳ 176 ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಪ್ರತಿ ಗ್ರಾಮ ಪಂಚಾಯತಿ ಅಡಿಯಲ್ಲಿ ಎಸ್.ಎಸ್.ಎಲ್.ಸಿ. ಉತ್ತೀರ್ಣ/ಅನುತ್ತೀರ್ಣರಾದ ಸಮರ್ಥ ವಿಕಲಚೇತನರನ್ನು ಗ್ರಾಮೀಣ ಪುನರ್ವಸತಿ ಕಾರ್ಯಕರ್ತರೆಂದು ಹಾಗೂ ತಾಲ್ಲೂಕು ಪಂಚಾಯಿತಿ ಕಚೇರಿಯಲ್ಲಿ ಸ್ಥಳೀಯ ಪದವೀಧರ ವಿಕಲಚೇತನರೊಬ್ಬರನ್ನು ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರೆಂದು, ಸ್ಥಳೀಯ ನಗರ ಪ್ರದೇಶಗಳಲ್ಲಿ ನಗರ ಪುನರ್ವಸತಿ ಕಾರ್ಯಕರ್ತರೆಂದು ಮತ್ತು ನಿರ್ದೇಶನಾಲಯದಲ್ಲಿ ರಾಜ್ಯ ಸಂಯೋಜಕರನ್ನು ಗೌರವಧನ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲಾಗಿದೆ. ಈ ಕಾರ್ಯಕರ್ತರ ಮೂಲಕ ವಿಕಲಚೇತನರಿಗೆ ಎಲ್ಲಾ ಸೇವಾ ಸೌಲಭ್ಯಗಳನ್ನು ಅವರಿರುವ ಸ್ಥಳಗಳಲ್ಲಿಯೇ ವಿಕಲಚೇತನರ ಮೂಲಕವೇ ತಲುಪಿಸಲಾಗುವುದು.

ಪ್ರಸ್ತುತ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು ಹಾಗೂ ನಗರ ಪುನರ್ವಸತಿ ಕಾರ್ಯಕರ್ತರುಗಳಿಗೆ ಮಾಹೆಯಾನ ರೂ.6000/- ಗೌರವಧನವನ್ನು ಹಾಗೂ ವಿವಿದ್ದೊದ್ದೇಶ ಪುನರ್ವಸತಿ ಕಾರ್ಯಕರ್ತರುಗಳಿಗೆ ಮಾಹೆಯಾನ ರೂ.12,000/-ಗಳ ಗೌರವಧನವನ್ನು ನೀಡಲಾಗುತ್ತಿದೆ.

**ಮರಣ ಪರಿಹಾರ ನಿಧಿ ಯೋಜನೆ:** ಪ್ರಸ್ತುತ ಗ್ರಾಮೀಣ ಪುನರ್ವಸತಿ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಕಾರ್ಯಕರ್ತರು ನಿಧನ ಹೊಂದಿದ್ದಲ್ಲಿ ರೂ.50,000/-ಗಳ ಪರಿಹಾರ ಧನ ನೀಡಲು ಅವಕಾಶವಿರುತ್ತದೆ.

### ಸಿ. ಆರ್ಥಿಕ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳು:

### 1. ಸಮಾಜ ಸೇವಾ ಸಂಕೀರ್ಣ:

ನಿರ್ಗತಿಕ ಬುದ್ಧಿಮಾಂದ್ಯ ಪುರುಷರಿಗಾಗಿ ಸಮಾಜ ಸೇವಾ ಸಂಕೀರ್ಣ ಸಂಸ್ಥೆಯು ಬೆಂಗಳೂರಿನಲ್ಲಿ ಸರ್ಕಾರದ ವತಿಯಿಂದ ನಡೆಯುತ್ತಿದ್ದು, ಈ ಸಂಸ್ಥೆಯಲ್ಲಿ ಉಚಿತ ಊಟ, ವಸತಿ, ವೈದ್ಯಕೀಯ ಸೌಲಭ್ಯ, ಸಂರಕ್ಷಣೆ ಒದಗಿಸಲಾಗುತ್ತಿದೆ. ಪ್ರಸ್ತುತ ಸಂಸ್ಥೆಯಲ್ಲಿ 80 ನಿವಾಸಿಗಳು ದಾಖಲಾಗಿರುತ್ತಾರೆ.

### 2. ಮಂದಮತಿ ಮಹಿಳೆಯರ ಅನುಪಾಲನಾ ಗೃಹ:

18 ವರ್ಷ ಮೇಲ್ಪಟ್ಟ ನಿರ್ಗತಿಕ ಮಹಿಳಾ ಬುದ್ಧಿಮಾಂದ್ಯರಿಗೆ ಉಚಿತ ಊಟ, ವಸತಿ, ವೈದ್ಯಕೀಯ ಸೌಲಭ್ಯ ಮತ್ತು ಸಂರಕ್ಷಣೆ ಒದಗಿಸುವ ಉದ್ದೇಶದಿಂದ ಮಂದಮತಿ ಮಹಿಳೆಯರ ಅನುಪಾಲನಾ ಗೃಹಗಳನ್ನು ಬೆಂಗಳೂರು ನಗರ ಹಾಗೂ ಹುಬ್ಬಳ್ಳಿಯಲ್ಲಿ ಇಲಾಖಾವತಿಯಿಂದ ನಡೆಸಲಾಗುತ್ತಿದೆ. ಪ್ರಸ್ತುತ ಬೆಂಗಳೂರು ಅನುಪಾಲನಾ ಕೇಂದ್ರದಲ್ಲಿ 100 ಮಂದಿ ಹಾಗೂ ಹುಬ್ಬಳ್ಳಿ ಅನುಪಾಲನ ಕೇಂದ್ರದಲ್ಲಿ 70 ನಿವಾಸಿಗಳು ದಾಖಲಾಗಿರುತ್ತಾರೆ.

### 3. ಮಾನಸಿಕ ಅಸ್ವಸ್ಥರಿಗೆ ಮಾನಸ ಕೇಂದ್ರಗಳು:

ಮಾನಸಿಕ ಅಸ್ವಸ್ಥರಿಗಾಗಿ ಮಾನಸ ಕೇಂದ್ರಗಳನ್ನು ಬೆಂಗಳೂರು ನಗರ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ನಡೆಸುತ್ತಿದ್ದು, ರಾಜ್ಯ ಉಚ್ಚ ನ್ಯಾಯಾಲಯ ಮತ್ತು ಅಧೀನ ನ್ಯಾಯಾಲಯಗಳಿಂದ

ಆದೇಶಿಸಲ್ಪಡುವ ಮಾನಸಿಕ ಅಸ್ವಸ್ಥರನ್ನು ಹಾಗೂ ರಸ್ತೆಗಳಲ್ಲಿ ಓಡಾಡುವ ನಿರ್ಗತಿಕ ಮಾನಸಿಕ ಅಸ್ವಸ್ಥರನ್ನು ಈ ಕೇಂದ್ರಗಳಲ್ಲಿ ನಿರ್ದಿಷ್ಟ ವೈದ್ಯಕೀಯ ಪ್ರಾಧಿಕಾರದ ಆದೇಶದ ಮೇರೆಗೆ ದಾಖಲಿಸಲು ಅವಕಾಶವಿರುತ್ತದೆ. ಈ ಕೇಂದ್ರಗಳಲ್ಲಿ ಫಲಾನುಭವಿಗಳಿಗೆ ಉಚಿತ ಊಟ, ವಸತಿ, ವೈದ್ಯಕೀಯ ಶುಶ್ರೂಷೆ, ವೈದ್ಯಕೀಯ ಸಲಹೆ(ಕೌನ್ಸಲಿಂಗ್) ಸೌಲಭ್ಯವನ್ನು ನೀಡಲಾಗುತ್ತಿದ್ದು, ಇವು ಅಲ್ಪಾವಧಿ ಕೇಂದ್ರಗಳಾಗಿರುತ್ತವೆ.

**4. ಬುದ್ದಿಮಾಂದ್ಯ ಮಕ್ಕಳ ಪೋಷಕರಿಗೆ ವಿಮಾ ಯೋಜನೆ:**

ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ: ತಾಯಿ: ಪೋಷಕರ ವಿಮಾ ಯೋಜನೆಯನ್ನು ಭಾರತೀಯ ಜೀವ ವಿಮಾ ನಿಗಮದ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ:ತಾಯಿ: ಪೋಷಕರು ಮರಣ ಹೊಂದಿದ ನಂತರ ಬುದ್ಧಿಮಾಂದ್ಯ ಮಕ್ಕಳ ಜೀವನ ನಿರ್ವಹಣೆಗಾಗಿ ರೂ.20,000/-ಗಳ ಪರಿಹಾರ ಧನವನ್ನು ಕುಟುಂಬದ ನಾಮ ನಿರ್ದೇಶಿತ ಸದಸ್ಯರಿಗೆ ಪಾವತಿಸಲಾಗುತ್ತಿದೆ.

**5. ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯರು ಮದುವೆಯಾದಲ್ಲಿ ಪ್ರೋತ್ಸಾಹ ಧನ ನೀಡುವ ಯೋಜನೆ:**

ವಿಕಲಚೇತನ ಯುವಕ/ಯುವತಿಯರನ್ನು ವಿವಾಹವಾಗುವ ಸಾಮಾನ್ಯ ಯುವಕ/ ಯುವತಿಯರಿಗೆ ನಿರಂತರವಾಗಿ ಮಾಸಿಕ ಆದಾಯ ದೊರಕಿಸಲು ವಿಕಲಚೇತನ ವ್ಯಕ್ತಿಯ ಹೆಸರಿನಲ್ಲಿ ರೂ.50,000/-ಗಳನ್ನು ಮದುವೆಯಾದ ಸಾಮಾನ್ಯ ವ್ಯಕ್ತಿ ಹಾಗೂ ವಿಕಲಚೇತನರ ಜಂಟಿ ಹೆಸರಿನಲ್ಲಿ 05 ವರ್ಷದ ಅವಧಿಗೆ ಹೂಡಿಕೆಯ ರೂಪದಲ್ಲಿ ನೀಡಿ ಪ್ರೋತ್ಸಾಹ ನೀಡಲು ಹಾಗೂ ಅದರಿಂದ ಬರುವ ಬಡ್ಡಿ ಹಣವನ್ನು ಉಪಯೋಗಿಸುವುದು ಹಾಗೂ 05 ವರ್ಷಗಳ ನಂತರ ಠೇವಣಿ ಮೊತ್ತವನ್ನು ವಾಪಸ್ಸು ಪಡೆಯಬಹುದು ಅಥವಾ ಮುಂದುವರೆಸಲು ಅವಕಾಶವಿರುತ್ತದೆ.

**6. ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಭತ್ಯೆ ಒದಗಿಸುವ ಯೋಜನೆ :**

ಅಂಧ ಮಹಿಳೆಯರು ಮಗುವಿಗೆ ಜನ್ಮ ನೀಡಿದಾಗ ಆ ಮಗುವನ್ನು ಇತರೆ ಸಾಮಾನ್ಯ ತಾಯಂದಿರಂತೆ ಆರೈಕೆ ಮಾಡುವುದು ಕಷ್ಟಕರವಾಗಿರುತ್ತದೆ.ಇಂತಹ ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಮಾಡಲು ಆಯಾ ಸೇವೆ, ಆರೋಗ್ಯ ಪಾಲನೆ, ಪೌಷ್ಠಿಕ ಆಹಾರ, ಔಷಧೋಪಚಾರಗಳಿಗೆ ಮಾಹೆಯಾನ ರೂ.2000/- ದಂತೆ **5 ವರ್ಷಗಳ** ಅವಧಿಗೆ ಸಹಾಯಧನವನ್ನು ನೀಡಲಾಗುತ್ತಿದೆ.ಈ ಸೌಲಭ್ಯವನ್ನು ಕನಿಷ್ಠ 2 ಮಕ್ಕಳವರೆಗೆ ಪಡೆಯಬಹುದಾಗಿದೆ.

**7. ನಿರುದ್ಯೋಗ ಭತ್ಯೆ:-** ಎಸ್.ಎಸ್.ಎಲ್.ಸಿ ಹಾಗೂ ನಂತರ ವ್ಯಾಸಂಗ ಮಾಡಿರುವ ನಿರುದ್ಯೋಗಿ ವಿಕಲಚೇತನರಿಗೆ ಮಾಸಿಕ ರೂ.1000/-ಗಳ ನಿರುದ್ಯೋಗ ಭತ್ಯೆಯನ್ನು ಮಂಜೂರು ಮಾಡಲಾಗುತ್ತಿದೆ.

**(ಡಿ) ಪುನರ್ವಸತಿ ಯೋಜನೆಗಳು:**

1. **ಅಂಗವಿಕಲರಿಗೆ ಸಾಧನ ಸಲಕರಣೆಗಳು :**

ಈ ಯೋಜನೆಯಡಿಯಲ್ಲಿ ಅಂಗವಿಕಲರಿಗೆ ಅವಶ್ಯವಾಗಿರುವ ಸಾಧನ ಸಲಕರಣೆಗಳನ್ನು ನೀಡ ಲಾಗುತ್ತಿದೆ. ಫಲಾನುಭವಿಯ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ಗ್ರಾಮೀಣ ಪ್ರದೇಶದ ಫಲಾನುಭವಿಗಳಿಗೆ ರೂ.11,500/- ಮತ್ತು ನಗರ ಪ್ರದೇಶದ ಫಲಾನುಭವಿಗಳಿಗೆ ರೂ.24,000/- ನಿಗದಿಗೂಳಿಸಲಾಗಿದೆ. ಈ ಯೋಜನೆಯಡಿ ರೂ.15,000/-ಗಳ ಮಿತಿಯೊಳಗೆ ವಿಕಲಚೇತನರಿಗೆ

ಅವಶ್ಯವಿರುವ ಗಾಲಿ ಕುರ್ಚಿ, ಸಾದಾ ತ್ರಿಚಕ್ರವಾಹನ, ಕ್ಯಾಲಿಪರ್ಸ್, ಕ್ರಚಸ್, ಶ್ರವಣ ಸಾಧನ, ವೈಟ್ ಕೇನ್, ಬ್ರೈಲ್ ವಾಚ್ ಇನ್ನಿತರ ಸಲಕರಣೆಗಳನ್ನು ಉಚಿತವಾಗಿ ನೀಡಲಾಗುತ್ತಿದೆ.

2. **ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಯೋಜನೆ :**

ಎಸ್.ಎಸ್.ಎಲ್.ಸಿ ನಂತರ ವ್ಯಾಸಂಗ ಮಾಡುವ ದೃಷ್ಟಿದೋಷವುಳ್ಳ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಪಡೆಯಲು ಅನುಕೂಲವಾಗುವಂತೆ ಮಾತನಾಡುವ (ಟಾಕಿಂಗ್) ಲ್ಯಾಪ್‌ಟಾಪ್‌ಗಳನ್ನು ಅರ್ಹ ಫಲಾನುಭವಿಗಳಿಗೆ ನೀಡಲಾಗುತ್ತಿದೆ

3. **ತೀವ್ರತರಹ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರವಾಹನ ಯೋಜನೆ :**

20 ರಿಂದ 60 ವರ್ಷದ ವಯೋಮಾನದ ತೀವ್ರತರವಾದ ದೈಹಿಕ ವಿಕಲಚೇತನರಿಗೆ ಓಡಾಡಲು ಅನುಕೂಲವಾಗುವಂತೆ ಜೀವಿತ ಕಾಲದಲ್ಲಿ ಒಂದು ಬಾರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ಮಂಜೂರು ಮಾಡಲಾಗುತ್ತದೆ. ಈ ಯೋಜನೆಯಡಿ ಫಲಾನುಭವಿಯ ಕುಟುಂಬದ ವಾರ್ಷಿಕ ವರಮಾನ ರೂ.2.00 ಲಕ್ಷಗಳಿಗಿಂತ ಕಡಿಮೆ ಇರಬೇಕಾಗಿರುತ್ತದೆ.

4. **ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ ಯೋಜನೆ:-**

ವಿಕಲಚೇತನರನ್ನು ಗುರುತಿಸಿ ಅವರಿಗೆ ಶೈಕ್ಷಣಿಕ, ಉದ್ಯೋಗ ಮತ್ತು ತರಬೇತಿ, ಸಾಮಾಜಿಕ ಭದ್ರತೆ ಹಾಗೂ ಪುನರ್ವಸತಿ ಸೇವೆಗಳನ್ನು ಅವರ ಮನೆ ಬಾಗಿಲಿನಲ್ಲಿಯೇ ಒದಗಿಸಿ ಅವರ ಸರ್ವಾಂಗೀಣ ಪುನರ್ವಸತಿಯನ್ನು ಕಲ್ಪಿಸುವುದು ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಈ ಯೋಜನೆಯಡಿ ವಿಕಲಚೇತನರಿಗೆ ಅಗತ್ಯವಿರುವ ವೈದ್ಯಕೀಯ ಸೇವೆ, ವೃತ್ತಿ ಚಿಕಿತ್ಸೆ, ವಿವಿಧ ರೀತಿಯ ಸಾಧನ ಸಲಕರಣೆಗಳನ್ನು ಕೇಂದ್ರಗಳಲ್ಲಿ ತಯಾರಿಸಿ ಒದಗಿಸಲಾಗುವುದು. ಪ್ರಸ್ತುತ 16 ಜಿಲ್ಲೆಗಳಲ್ಲಿ ಜಿಲ್ಲಾ ಪುನರ್ವಸತಿ ಕೇಂದ್ರಗಳು ನಡೆಯುತ್ತಿವೆ. (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಬೆಳಗಾವಿ, ಬೀದರ್, ಚಿತ್ರದುರ್ಗ, ದಕ್ಷಿಣ ಕನ್ನಡ, ಮೈಸೂರು, ಉಡುಪಿ, ಹಾಸನ, ವಿಜಯಪುರ, ರಾಯಚೂರು, ಚಿಕ್ಕಮಗಳೂರು, ಬಳ್ಳಾರಿ, ಹಾವೇರಿ, ಚಾಮರಾಜನಗರ, ಗದಗ)

5. **ಅಂಗವಿಕಲತೆಯನ್ನು ನಿವಾರಿಸುವ ಶಸ್ತ್ರಚಿಕಿತ್ಸೆಗಾಗಿ ವೈದ್ಯಕೀಯ ಪರಿಹಾರ ನಿಧಿ ಯೋಜನೆ:-**

ಅಂಗವಿಕಲ ವ್ಯಕ್ತಿಗಳಿಗೆ ಅಂಗವಿಕಲತೆಯನ್ನು ನಿವಾರಿಸಲು ಶಸ್ತ್ರ ಚಿಕಿತ್ಸೆಗಾಗಿ ಸರ್ಕಾರಿ ಆಸ್ಪತ್ರೆ, ಸಂಜಯಗಾಂಧಿ ಆಸ್ಪತ್ರೆಗಳಲ್ಲಿ ಹಾಗೂ ಸುಸಜ್ಜಿತ ಖಾಸಗಿ ಆಸ್ಪತ್ರೆಗಳಲ್ಲಿ ಅಂಗವಿಕಲತೆ ನಿವಾರಣಾ ಶಸ್ತ್ರ ಚಿಕಿತ್ಸೆಗಾಗಿ ರೂ.1.00 ಲಕ್ಷಗಳವರೆಗೆ ಸಹಾಯ ಧನವನ್ನು ಮಂಜೂರು ಮಾಡಲಾಗುತ್ತಿದೆ.

6. **ಅಂಧ ವಿದ್ಯಾರ್ಥಿಗಳೀಗೆ ಬ್ರೈಲ್ ಕಿಟ್‌ಗಳ ವಿತರಿಸುವ ಯೋಜನೆ:-**

ಅಂಧ ವಿದ್ಯಾರ್ಥಿಗಳು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಸ್ವಾವಲಂಬಿಗಳಾಗಲು ರಾಜ್ಯದ ಅಂಧ ವಿದ್ಯಾರ್ಥಿಗಳಿಗೆ ಟಾಂಕಿಗ್ ಮೊಬೈಲ್, ಬ್ರೈಲ್ ವಾಚ್, ವಾಕಿಂಗ್ ಸ್ಟಿಕ್ ಮತ್ತು ಇನ್ನಿತರ ಸಾಧನೆಗಳನ್ನು ಒಳಗೊಂಡ ತಲಾ ರೂ.25000/-ಗಳ ಕಿಟ್‌ಗಳನ್ನು ವಿತರಿಸಲಾಗುತ್ತಿದೆ.

7. ಶ್ರವಣದೋಷವುಳ್ಳ ವ್ಯಕ್ತಿಗಳಿಗೆ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರವನ್ನು ವಿತರಿಸುವ ಯೋಜನೆ:–

ಶ್ರವಣದೋಷವುಳ್ಳವರು ಉದ್ಯೋಗಾವಕಾಶದಿಂದ ವಂಚಿತರಾಗುತ್ತಿರುವುದನ್ನು ಮನಗಂಡು ಅವರು ಸ್ವಯಂ ಉದ್ಯೋಗ ಕೈಗೊಂಡು ಸ್ವಾವಲಂಬಿಗಳಾಗಲು ಅನುವಾಗುವಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಶ್ರವಣದೋಷವುಳ್ಳ ವ್ಯಕ್ತಿಗಳಿಗೆ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರವನ್ನು ವಿತರಿಸಲಾಗುತ್ತಿದೆ.

(ಇ). ಸಾಧನೆ ಮತ್ತು ಪ್ರತಿಭೆ ಯೋಜನೆ:

ವಿಕಲಚೇತನ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡಲು "ಸಾಧನೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ಕ್ರೀಡೆಗಳಲ್ಲಿ ವಿಶೇಷ ಸಾಧನೆಗೈದ ವಿಕಲಚೇತನರಿಗೆ ರೂ.50,000/–ಗಳ ಧನ ಸಹಾಯವನ್ನು ನೀಡಲಾಗುತ್ತಿದೆ.

ವಿಕಲಚೇತನರು ನೀಡುವ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡುವ ಸಲುವಾಗಿ "ಪ್ರತಿಭೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ವೈಯಕ್ತಿಕ ಸಾಂಸ್ಕೃತಿಕ ರೂ.2,000/–ಗಳು ಹಾಗೂ ಸಮೂಹ ಕಾರ್ಯಕ್ರಮಕ್ಕೆ ರೂ.10,000/–ಗಳ ಪ್ರೋತ್ಸಾಹಧನ ನೀಡಲಾಗುತ್ತದೆ.

(ಎಫ್). ನಿರಾಮಯ ಆರೋಗ್ಯ ವಿಮಾ ಯೋಜನೆ :

ಬುದ್ಧಿಮಾಂದ್ಯ, ಸೆರಬ್ರಲ್ ಪಾಲ್ಸಿ, ಆಟಿಸಂ ಮತ್ತು ಬಹುವಿಧ ಅಂಗವಿಕಲತೆ ಹೊಂದಿರುವ ಪ್ರತಿ ವ್ಯಕ್ತಿ ಹಾಗೂ ಮಗುವಿಗೆ ವರ್ಷಕ್ಕೆ ಒಂದು ಬಾರಿ ಪ್ರೀಮಿಯಂ ಮೊತ್ತ ರೂ.250/–ಗಳನ್ನು ಭಾರತ ಸರ್ಕಾರದಿಂದ ಗುರುತಿಸಲ್ಪಟ್ಟ ಅಧಿಕೃತ ಸಂಸ್ಥೆಯಾದ ಅಂಗವಿಕಲರ ಪುನಶ್ಚೇತನ ಸಂಸ್ಥೆ (ರಿ) (ಎ.ಪಿ.ಡಿ) ಬೆಂಗಳೂರು ರವರಿಗೆ ಪಾವತಿಸಲಾಗುವುದು. ಪ್ರತಿ ವರ್ಷ ಯೋಜನೆಯಡಿ ಬರುವ ಫಲಾನುಭವಿಗಳು ರೂ.1.00 ಲಕ್ಷಗಳವರೆಗೆ ವೈದ್ಯಕೀಯ ಸೌಲಭ್ಯ ಪಡೆಯಬಹುದಾಗಿರುತ್ತದೆ. ಈ ಮೊತ್ತದಲ್ಲಿ ರೂ.60,000/–ಗಳವರೆಗೆ ಸರ್ಜರಿ ವೆಚ್ಚ ಉಳಿದ ರೂ.40,000/–ಗಳಲ್ಲಿ ವೈದ್ಯಕೀಯ ಖರ್ಚು ಥೆರಪಿ, ಪ್ರಯಾಣ ವೆಚ್ಚಗಳನ್ನು ಒಳಗೊಂಡಿರುತ್ತದೆ.

(ಜಿ). ಸ್ಪರ್ಧಾ ಚೇತನ ಯೋಜನೆ:–

ಈ ಯೋಜನೆಯಡಿ ವಿಶೇಷ ಸಾಮರ್ಥ್ಯ/ಭಿನ್ನ ಸಾಮರ್ಥ್ಯದ ವಿದ್ಯಾವಂತ ವ್ಯಕ್ತಿಗೆಗಳಿಗೆ ಐ.ಎ.ಎಸ್./ಕೆ.ಎ.ಎಸ್. ಹಾಗೂ ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸರ್ಕಾರದ ಇತರೆ ಇಲಾಖೆಗಳಡಿ ಗುರುತಿಸಲ್ಪಟ್ಟ ಪೂರ್ವ ಪರೀಕ್ಷಾ ತರಬೇತಿ ಕೇಂದ್ರಗಳು ಹಾಗೂ ಈ ಇಲಾಖೆಯಿಂದ ಗುರುತಿಸಲ್ಪಟ್ಟ ತರಬೇತಿ ಕೇಂದ್ರಗಳ ಮೂಲಕ ತರಬೇತಿಯನ್ನು ಉಚಿತವಾಗಿ ನೀಡಲಾಗುತ್ತಿದೆ.

(ಹೆಚ್). ವಿಕಲಚೇತನರಿಗೆ ವಿಶಿಷ್ಟ ಗುರುತಿನ ಚೀಟಿ (UNIQUE DISABILITY ID)ನೀಡುವ ಯೋಜನೆಯು ಕೇಂದ್ರ ಸರ್ಕಾರ ಪ್ರಾಯೋಜಿತ ಯೋಜನೆಯಾಗಿದೆ. ರಾಜ್ಯ ಸರ್ಕಾರದಿಂದ ನೇಮಿಸಲಾಗುವ ವೈದ್ಯಕೀಯ ಪ್ರಾಧಿಕಾರಗಳಿಂದ ದೃಢೀಕರಿಸಲಾಗುವ ವೈದ್ಯಕೀಯ ಪ್ರಮಾಣ ಪತ್ರದ ಸಮಗ್ರ ಮಾಹಿತಿಯುಳ್ಳ ಗಣಕೀಕೃತ ಗುರುತಿನ ಚೀಟಿಯನ್ನು ವಿ ಕಲಚೇತನ ವ್ಯಕ್ತಿಗಳಿಗೆ ನೀಡುವ ವ್ಯವಸ್ಥೆಯಾಗಿದ್ದು, ಇದರಲ್ಲಿ ವಿಕಲಚೇತನ ವ್ಯಕ್ತಿಯ ವಿವರಗಳು ಹಾಗೂ ಅವರಲ್ಲಿರುವ ವಿಕಲತೆಯ ವಿವರ ಮತ್ತು ಪ್ರಮಾಣವನ್ನು ನಮೂದಿಸಲಾಗಿರುತ್ತದೆ.

ಅನುಬಂಧ-2

## ವಿಕಲಚೇತನರ ಅಭಿವೃದ್ಧಿ ಮಂಜೂರಾದ ಅನುದಾನ ಸಂಪೂರ್ಣ ಮಾಹಿತಿಯ ವಿವರ

2018-19 (ಲಕ್ಷ ರೂ.ಗಳಲ್ಲಿ)

| ಕ್ರ ಸಂ | ಯೋಜನೆಗಳ ಹೆಸರು ಮತ್ತು ಲೆಕ್ಕಶೀರ್ಷಿಕೆ | ಮಂಜೂರಾದ ಅನುದಾನ | ಬಳಕೆಯಾದ ಅನುದಾನ | ಬಳಕೆ ಯಾಗದೇ ಇರುವ ಅನುದಾನ |
|---|---|---|---|---|
| I | ರಾಜ್ಯ ವಲಯ | | | |
| 1 | ಸಮಾಜ ಸೇವಾ ಸಂಕೀರ್ಣ 2235-02-001-0-03 | 155.00 | 62.75 | 92.25 |
| 2 | ಅಂಗವಿಕಲರಿಗಾಗಿ ನಿರ್ದೇಶನಾಲಯ 2235-02-001-0-05 | 700.00 | 686.11 | 13.89 |
| 3 | ಕಿವುಡು & ಅಂಧ ಮಕ್ಕಳ ಶಾಲೆಗಳ ಅಭಿವೃದ್ಧಿ 2235-02-101-0-02 | 70.00 | 56.22 | 13.78 |
| 4 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ ಧನ 2235-02-101-0-05 | 596.00 | 504.08 | 91.92 |
| 5 | ಬಡ ಅಂಗವಿಕಲರಿಗೆ ಮಾಸಿಕ ನಿರ್ವಹಣಾ ಭತ್ಯೆ 2235-02-101-0-20 | 109779.00 | 106018.44 | 3760.56 |
| 6 | ಅಂಗವಿಕಲರ ಅಧಿನಿಯಮ 1995ರ ಮೇರೆಗೆ ಆಯುಕ್ತಾಲಯ 2235-02-101-0-47 | 61.22 | 61.22 | 0.00 |
| 7 | ಮಾನಸಿಕವಾಗಿ ಸವಾಲಿಗೊಳಗಾದವರಿಗೆ ನಿವಾಸಿ ಗೃಹಗಳು 2235-02-101-0-49 | 56.00 | 27.34 | 28.66 |
| 8 | ಮಹಿಳಾ ಅಂಗವಿಕಲರಿಗೆ ಹಾಸ್ಟಲ್‌ಗಳು 2235-02-101-0-50 | 350.00 | 313.32 | 36.68 |
| 9 | ಅಂಗವಿಕಲರಿಗೆ ಸಾಧನ ಸಲಕರಣೆಗಳು 2235-02-101-0-52 | 1268.00 | 240.85 | 1027.15 |
| 10 | ಅಂಗವಿಕಲರಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ 2235-02-101-0-53 | 2271.00 | 1756.93 | 514.07 |
| 11 | ವಿಕಲಚೇತನರಿಗೆ ಉದ್ಯೋಗ ಕೋಶ 2235-02-101-0-55 | 45.00 | 10.40 | 34.60 |
| 12 | ದೈಹಿಕ ಮತ್ತು ಮಾನಸಿಕ ಸವಾಲಿಗೊಳಗಾದವರ ಕಲ್ಯಾಣ 2235-02-101-0-99 | 2600.00 | 2464.95 | 135.05 |
| 13 | ಹಿರಿಯ ನಾಗರಿಕರ ನೀತಿ 2235-02-104-2-04 | 500.00 | 424.86 | 75.14 |
| 14 | ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ವಿಶೇಷ ಶಾಲೆಗಳಿಗೆ ಸಹಾಯಾನುಧಾನ 2235-02-104-2-06 | 5502.00 | 5257.55 | 244.45 |
| 15 | ಕಟ್ಟಡಗಳು 4235-02-101-1-01 | 132.00 | 113.97 | 18.03 |
| | ಒಟ್ಟು ರೂ. | **124085.22** | **117998.99** | **6086.23** |
| II | ಜಿಲ್ಲಾ ವಲಯ | | | |
| 1 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವಿಶೇಷ ಶಾಲೆಗಳು 2235-00-101-0-28 | 1676.00 | 1676.00 | 0.00 |
| 2 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವೃದ್ಧಾಶ್ರಮಗಳು 2235-00-101-0-30 | 240.00 | 239.70 | 0.30 |
| | ಒಟ್ಟು ರೂ. | **1916.00** | **1915.70** | 0.30 |
| | ಒಟ್ಟು ರೂ. ( I+ II) | **126001.22** | **119914.69** | **6086.53** |

## ಅನುಬಂಧ-2

## ವಿಕಲಚೇತನರ ಅಭಿವೃದ್ಧಿ ಮಂಜೂರಾದ ಅನುದಾನ ಸಂಪೂರ್ಣ ಮಾಹಿತಿಯ ವಿವರ

2019-20 (ರೂ. ಲಕ್ಷಗಳಲ್ಲಿ)

| ಕ್ರ ಸಂ | ಯೋಜನೆಗಳ ಹೆಸರು ಮತ್ತು ಲೆಕ್ಕಶೀರ್ಷಿಕೆ | ಮಂಜೂರಾದ ಅನುದಾನ | ಬಳಕೆಯಾದ ಅನುದಾನ | ಬಳಕೆ ಯಾಗದೇ ಇರುವ ಅನುದಾನ |
|---|---|---|---|---|
| I | ರಾಜ್ಯ ವಲಯ | | | |
| 1 | ಸಮಾಜ ಸೇವಾ ಸಂಕೀರ್ಣ 2235-02-001-0-03 | 114.00 | 67.96 | 46.04 |
| 2 | ಅಂಗವಿಕಲರಿಗಾಗಿ ನಿರ್ದೇಶನಾಲಯ 2235-02-001-0-05 | 411.29 | 355.74 | 55.55 |
| 3 | ಕಿವುಡು & ಅಂಧ ಮಕ್ಕಳ ಶಾಲೆಗಳ ಅಭಿವೃದ್ಧಿ 2235-02-101-0-02 | 83.00 | 62.33 | 20.67 |
| 4 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ ಧನ 2235-02-101-0-05 | 596.00 | 550.61 | 45.39 |
| 5 | ಅಂಗವಿಕಲರ ಅಧಿನಿಯಮ 1995ರ ಮೇರೆಗೆ ಆಯುಕ್ತಾಲಯ 2235-02-101-0-47 | 77.85 | 67.69 | 10.16 |
| 6 | ಮಾನಸಿಕವಾಗಿ ಸವಾಲಿಗೊಳಗಾದವರಿಗೆ ನಿವಾಸಿ ಗೃಹಗಳು 2235-02-101-0-49 | 49.00 | 26.56 | 22.44 |
| 7 | ಮಹಿಳಾ ಅಂಗವಿಕಲರಿಗೆ ಹಾಸ್ಟಲ್‌ಗಳು 2235-02-101-0-50 | 350.00 | 319.85 | 30.15 |
| 8 | ಅಂಗವಿಕಲರಿಗೆ ಸಾಧನ ಸಲಕರಣೆಗಳು 2235-02-101-0-52 | 1960.00 | 1862.47 | 97.53 |
| 9 | ಅಂಗವಿಕಲರಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ 2235-02-101-0-53 | 2022.00 | 1960.35 | 61.65 |
| 10 | ವಿಕಲಚೇತನರಿಗೆ ಉದ್ಯೋಗ ಕೋಶ 2235-02-101-0-55 | 9.00 | 3.40 | 5.60 |
| 11 | ದೈಹಿಕ ಮತ್ತು ಮಾನಸಿಕ ಸವಾಲಿಗೊಳಗಾಥವರ ಕಲ್ಯಾಣ 2235-02-101-0-99 | 3600.50 | 2472.13 | 1128.37 |
| 12 | ಹಿರಿಯ ನಾಗರಿಕರ ನೀತಿ 2235-02-104-2-04 | 503.11 | 362.32 | 140.79 |
| 13 | ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ವಿಶೇಷ ಶಾಲೆಗಳಿಗೆ ಸಹಾಯಾನುಧಾನ 2235-02-104-2-06 | 6168.00 | 5359.76 | 808.24 |
| 14 | ಕಟ್ಟಡಗಳು 4235-02-101-1-01 | 100.00 | 80.14 | 19.86 |
| 15 | ಅಶಕ್ತರಿಗಾಗಿ ಅಶಕ್ತ ಅಧಿನಿಯಮಗಳ ಅನುಷ್ಠಾನ (ಸಿಪ್ಡಾ) 2235-02-101-0-41 | 1104.00 | 1094.21 | 9.79 |
| 16 | ಮಾದಕ ವಸ್ತುಗಳ ಬೇಡಿಕೆಯನ್ನು ಕಡಿತಗೊಳಿಸಲು ರಾಷ್ಟ್ರೀಯ ಕ್ರೀಯಾ ಯೋಜನೆ (ಕೇ.ಪು.ಯೋ.) 2235-02-200-0-07 | 112.50 | 0.00 | 112.50 |
| | ಒಟ್ಟು ರೂ. | **17260.25** | **14645.52** | **2614.73** |
| II | ಜಿಲ್ಲಾ ವಲಯ | | | |
| 1 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವಿಶೇಷ ಶಾಲೆಗಳು 2235-00-101-0-28 | 2046.00 | 1192.89 | 853.11 |
| 2 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವೃದ್ಧಾಶ್ರಮಗಳು 2235-00-101-0-30 | 240.00 | 161.13 | 78.87 |
| | ಒಟ್ಟು ರೂ. | **2286.00** | **1354.02** | **931.98** |
| | ಒಟ್ಟು ರೂ. ( I+ II) | **19546.25** | **15999.54** | **3546.71** |

# ಅನುಬಂಧ-2

## ವಿಕಲಚೇತನರ ಅಭಿವೃದ್ಧಿ ಮಂಜೂರಾದ ಅನುದಾನ ಸಂಪೂರ್ಣ ಮಾಹಿತಿಯ ವಿವರ

2020-21 (ರೂ. ಲಕ್ಷಗಳಲ್ಲಿ)

| ಕ್ರ ಸಂ | ಯೋಜನೆಗಳ ಹೆಸರು ಮತ್ತು ಲೆಕ್ಕಶೀರ್ಷಿಕೆ | ಮಂಜೂರಾದ ಅನುದಾನ | ಬಳಕೆಯಾದ ಅನುದಾನ | ಬಳಕೆಯಾಗದೇ ಇರುವ ಅನುದಾನ |
|---|---|---|---|---|
| I | ರಾಜ್ಯ ವಲಯ | | | |
| 1 | ಸಮಾಜ ಸೇವಾ ಸಂಕೀರ್ಣ 2235-02-001-0-03 | 115.50 | 66.17 | 49.33 |
| 2 | ಅಂಗವಿಕಲರಿಗಾಗಿ ನಿರ್ದೇಶನಾಲಯ 2235-02-001-0-05 | 487.68 | 401.64 | 86.04 |
| 3 | ಕಿವುಡು & ಅಂಧ ಮಕ್ಕಳ ಶಾಲೆಗಳ ಅಭಿವೃದ್ಧಿ 2235-02-101-0-02 | 73.19 | 44.57 | 28.62 |
| 4 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ ಧನ 2235-02-101-0-05 | 625.00 | 527.97 | 97.03 |
| 5 | ಅಂಗವಿಕಲರ ಅಧಿನಿಯಮ 1995ರ ಮೇರೆಗೆ ಆಯುಕ್ತಾಲಯ 2235-02-101-0-47 | 93.15 | 70.64 | 22.51 |
| 6 | ಮಾನಸಿಕವಾಗಿ ಸವಾಲಿಗೊಳಗಾದವರಿಗೆ ನಿವಾಸಿ ಗೃಹಗಳು 2235-02-101-0-49 | 34.00 | 24.14 | 9.86 |
| 7 | ಮಹಿಳಾ ಅಂಗವಿಕಲರಿಗೆ ಹಾಸ್ಟಲ್‌ಗಳು 2235-02-101-0-50 | 275.00 | 271.54 | 3.46 |
| 8 | ಅಂಗವಿಕಲರಿಗೆ ಸಾಧನ ಸಲಕರಣೆಗಳು 2235-02-101-0-52 | 2220.00 | 2117.32 | 102.68 |
| 9 | ಅಂಗವಿಕಲರಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ 2235-02-101-0-53 | 5642.00 | 4022.25 | 1619.75 |
| 10 | ವಿಕಲಚೇತನರಿಗೆ ಉದ್ಯೋಗ ಕೋಶ 2235-02-101-0-55 | 5.00 | 2.48 | 2.52 |
| 11 | ದೈಹಿಕ ಮತ್ತು ಮಾನಸಿಕ ಸವಾಲಿಗೊಳಗಾದವರ ಕಲ್ಯಾಣ 2235-02-101-0-99 | 2985.12 | 2471.31 | 513.81 |
| 12 | ಹಿರಿಯ ನಾಗರಿಕರ ನೀತಿ 2235-02-104-2-04 | 513.17 | 366.08 | 147.09 |
| 13 | ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ವಿಶೇಷ ಶಾಲೆಗಳಿಗೆ ಸಹಾಯಾನುಧಾನ 2235-02-104-2-06 | 4888.00 | 4413.27 | 474.73 |
| 14 | ಕಟ್ಟಡಗಳು 4235-02-101-1-01 | 100.00 | 100.00 | 0.00 |
| | **ಒಟ್ಟು ರೂ.** | **18056.81** | **14899.38** | **3157.43** |
| II | ಜಿಲ್ಲಾ ವಲಯ | | | |
| 1 | ಸರ್ಕಾರೇತರ ಸಂಸ್ಥೆ ಗಳಿಗೆ ಸಹಾಯಧನ ವಿಶೇಷ ಶಾಲೆಗಳು 2235-00-101-0-28 | 1617.50 | 1617.50 | 0.00 |
| 2 | ಸರ್ಕಾರೇತರ ಸಂಸ್ಥೆ ಗಳಿಗೆ ಸಹಾಯಧನ ವೃದ್ಧಾಶ್ರಮಗಳು 2235-00-101-0-30 | 264.00 | 264.00 | 0.00 |
| | **ಒಟ್ಟು ರೂ.** | **1881.50** | **1881.50** | 0.00 |
| | **ಒಟ್ಟು ರೂ. ( I+ II)** | **19938.31** | **16780.88** | **3157.43** |

# ಅನುಬಂಧ-03

## ವಿಕಲಚೇತನರ ಅಭಿವೃದ್ಧಿಗೆ ಮಂಜೂರಾದ ಅನುದಾನ ಸಂಪೂರ್ಣ ಮಾಹಿತಿಯ ವಿವರ:-

20018-19:

| ಕ್ರ ಸಂ | ಯೋಜನೆಯ ಹೆಸರು ಮತ್ತು ಲೆಕ್ಕಶೀರ್ಷಿಕೆ | ಆಯ ವ್ಯಯ ನಿಗದಿ | ಪರಿಷ್ಕೃತ ಅನುದಾನ | ಆಯವ್ಯಯ ಬಿಡುಗಡೆ | ಮಾರ್ಚ್- 19ರ ವರೆಗಿನ ವೆಚ್ಚ | ಬಳಕೆಯಾಗದ ಅನುದಾನ |
|---|---|---|---|---|---|---|
| I | ರಾಜ್ಯ ವಲಯ | | | | | |
| 1 | ಸಮಾಜ ಸೇವಾ ಸಂಕೀರ್ಣ 2235-02-001-0-03 | 155.00 | 155.00 | 155.00 | 62.75 | 92.25 |
| 2 | ಅಂಗವಿಕಲರಿಗಾಗಿ ನಿರ್ದೇಶನಾಲಯ 2235-02-001-0-05 | 999.00 | 700.00 | 700.00 | 686.11 | 13.89 |
| 3 | ಕಿವುಡು & ಅಂಧ ಮಕ್ಕಳ ಶಾಲೆಗಳ ಅಭಿವೃದ್ಧಿ 2235-02-101-0-02 | 70.00 | 70.00 | 70.00 | 56.22 | 13.78 |
| 4 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ ಧನ 2235-02-101-0-05 | 596.00 | 596.00 | 596.00 | 504.08 | 91.92 |
| 5 | ಬಡ ಅಂಗವಿಕಲರಿಗೆ ಮಾಸಿಕ ನಿರ್ವಹಣಾ ಭತ್ಯೆ 2235-02-101-0-20 | 109779.00 | 109779.00 | 109779.00 | 106018.44 | 3760.56 |
| 6 | ಅಂಗವಿಕಲರ ಅಧಿನಿಯಮ 1995ರ ಮೇರೆಗೆ ಆಯುಕ್ತಾಲಯ 2235-02-101-0-47 | 43.00 | 61.22 | 43.00 | 61.22 | 0.00 |
| 7 | ಮಾನಸಿಕವಾಗಿ ಸವಾಲಿಗೊಳಗಾದವರಿಗೆ ನಿವಾಸಿ ಗೃಹಗಳು 2235-02-101-0-49 | 56.00 | 56.00 | 56.00 | 27.34 | 28.66 |
| 8 | ಮಹಿಳಾ ಅಂಗವಿಕಲರಿಗೆ ಹಾಸ್ಟಲ್‌ಗಳು 2235-02-101-0-50 | 350.00 | 350.00 | 350.00 | 313.32 | 36.68 |
| 9 | ಅಂಗವಿಕಲರಿಗೆ ಸಾಧನ ಸಲಕರಣೆಗಳು 2235-02-101-0-52 | 1300.00 | 1268.00 | 1268.00 | 240.85 | 1027.15 |
| 10 | ಅಂಗವಿಕಲರಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ 2235-02-101-0-53 | 1901.00 | 2271.00 | 2271.00 | 1756.93 | 514.07 |
| 11 | ವಿಕಲಚೇತನರಿಗೆ ಉದ್ಯೋಗ ಕೋಶ 2235-02-101-0-55 | 100.00 | 45.00 | 45.00 | 10.40 | 34.60 |
| 12 | ದೈಹಿಕ ಮತ್ತು ಮಾನಸಿಕ ಸವಾಲಿಗೊಳಗಾದವರ ಕಲ್ಯಾಣ 2235-02-101-0-99 | 2850.00 | 2600.00 | 2600.00 | 2464.95 | 135.05 |
| 13 | ಹಿರಿಯ ನಾಗರಿಕರ ನೀತಿ 2235-02-104-2-04 | 500.00 | 500.00 | 500.00 | 424.86 | 75.14 |
| 14 | ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ವಿಶೇಷ ಶಾಲೆಗಳಿಗೆ ಸಹಾಯಾನುಧಾನ 2235-02-104-2-06 | 5236.00 | 5502.00 | 5502.00 | 5257.55 | 244.45 |
| 15 | ಕಟ್ಟಡಗಳು 4235-02-101-1-01 | 132.00 | 132.00 | 132.00 | 113.97 | 18.03 |
| | ಒಟ್ಟು ರೂ. | **124067.00** | **124085.22** | **124067.00** | **117998.99** | **6086.23** |
| II | ಜಿಲ್ಲಾ ವಲಯ | | | | | |
| 1 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವಿಶೇಷ ಶಾಲೆಗಳು 2235-00-101-0-28 | 1676.00 | 1676.00 | 1676.00 | 1676.00 | 0.00 |
| 2 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವೃದ್ಧಾಶ್ರಮಗಳು 2235-00-101-0-30 | 240.00 | 240.00 | 240.00 | 239.70 | 0.30 |
| | ಒಟ್ಟು ರೂ. | **1916.00** | **1916.00** | **1916.00** | **1915.70** | 0.30 |
| | ಒಟ್ಟು ರೂ. ( I+ II) | **125983.00** | **126001.22** | **125983.00** | **119914.69** | 6086.53 |

2019–20:

| ಕ್ರ ಸಂ | ಯೋಜನೆಗಳ ವಿವರ | 2019–20ನೇ ಸಾಲಿನ ಆಯವ್ಯಯದಲ್ಲಿ ನಿಗಧಿ | ಬಿಡುಗಡೆಯಾದ ಮೊತ್ತ | ಖರ್ಚಾದ ಮೊತ್ತ ಮಾರ್ಚ್–2020ರ ಅಂತ್ಯಕ್ಕೆ | ಬಳಕೆಯಾಗದ ಅನುದಾನ |
|---|---|---|---|---|---|
| I | ರಾಜ್ಯ ವಲಯ | | | | |
| 1 | ಸಮಾಜ ಸೇವಾ ಸಂಕೀರ್ಣ 2235–02–001–0–03 | 114.00 | 114.00 | 67.96 | 46.04 |
| 2 | ಅಂಗವಿಕಲರಿಗಾಗಿ ನಿರ್ದೇಶನಾಲಯ 2235–02–001–0–05 | 411.29 | 411.29 | 355.74 | 55.55 |
| 3 | ಕಿವುಡು & ಅಂಧ ಮಕ್ಕಳ ಶಾಲೆಗಳ ಅಭಿವೃದ್ಧಿ 2235–02–101–0–02 | 83.00 | 83.00 | 62.33 | 20.67 |
| 4 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ ಧನ 2235–02–101–0–05 | 596.00 | 596.00 | 550.61 | 45.39 |
| 5 | ಅಂಗವಿಕಲರ ಅಧಿನಿಯಮ 1995ರ ಮೇರೆಗೆ ಆಯುಕ್ತಾಲಯ 2235–02–101–0–47 | 77.85 | 77.85 | 67.69 | 10.16 |
| 6 | ಮಾನಸಿಕವಾಗಿ ಸವಾಲಿಗೊಳಗಾದವರಿಗೆ ನಿವಾಸಿ ಗೃಹಗಳು 2235–02–101–0–49 | 49.00 | 49.00 | 26.56 | 22.44 |
| 7 | ಮಹಿಳಾ ಅಂಗವಿಕಲರಿಗೆ ಹಾಸ್ಟಲ್‌ಗಳು 2235–02–101–0–50 | 350.00 | 350.00 | 319.85 | 30.15 |
| 8 | ಅಂಗವಿಕಲರಿಗೆ ಸಾಧನ ಸಲಕರಣೆಗಳು 2235–02–101–0–52 | 1960.00 | 1960.00 | 1862.47 | 97.53 |
| 9 | ಅಂಗವಿಕಲರಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ 2235–02–101–0–53 | 2022.00 | 2022.00 | 1960.35 | 61.65 |
| 10 | ವಿಕಲಚೇತನರಿಗೆ ಉದ್ಯೋಗ ಕೋಶ 2235–02–101–0–55 | 9.00 | 9.00 | 3.40 | 5.60 |
| 11 | ದೈಹಿಕ ಮತ್ತು ಮಾನಸಿಕ ಸವಾಲಿಗೊಳಗಾದವರ ಕಲ್ಯಾಣ 2235–02–101–0–99 | 3600.50 | 3600.50 | 2472.13 | 1128.37 |
| 12 | ಹಿರಿಯ ನಾಗರಿಕರ ನೀತಿ 2235–02–104–2–04 | 503.11 | 503.11 | 362.32 | 140.79 |
| 13 | ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ವಿಶೇಷ ಶಾಲೆಗಳಿಗೆ ಸಹಾಯಾನುಧಾನ 2235–02–104–2–06 | 6168.00 | 6168.00 | 5359.76 | 808.24 |
| 14 | ಕಟ್ಟಡಗಳು 4235–02–101–1–01 | 100.00 | 100.00 | 80.14 | 19.86 |
| 15 | ಅಶಕ್ತರಿಗಾಗಿ ಅಶಕ್ತ ಅಧಿನಿಯಮಗಳ ಅನುಷ್ಠಾನ (ಸಿಪ್ಡಾ) 2235–02–101–0–41 | 1104.00 | 1104.00 | 1094.21 | 9.79 |
| 16 | ಮಾದಕ ವಸ್ತುಗಳ ಬೇಡಿಕೆಯನ್ನು ಕಡಿತಗೊಳಿಸಲು ರಾಷ್ಟ್ರೀಯ ಕ್ರೀಯಾ ಯೋಜನೆ (ಕೇ.ಪು.ಯೋ.) 2235–02–200–0–07 | 112.50 | 112.50 | 0.00 | 112.50 |
| | **ಒಟ್ಟು ರೂ.** | **17260.25** | **17260.25** | **14645.52** | 2614.73 |
| II | ಜಿಲ್ಲಾ ವಲಯ | | | | |
| 1 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವಿಶೇಷ ಶಾಲೆಗಳು 2235–00–101–0–28 | 2046.00 | 1192.89 | 1192.89 | 0.00 |
| 2 | ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ವೃದ್ಧಾಶ್ರಮಗಳು 2235–00–101–0–30 | 240.00 | 161.13 | 161.13 | 0.00 |
| | **ಒಟ್ಟು ರೂ.** | **2286.00** | **1354.02** | **1354.02** | 0.00 |
| | **ಒಟ್ಟು ರೂ. ( I+ II)** | **19546.25** | **18614.27** | **15999.54** | 2614.73 |

**2020–21:**

| ಕ್ರ ಸಂ | ಯೋಜನೆಗಳ ವಿವರ | 2020–21ನೇ ಸಾಲಿನ ಆಯವ್ಯಯ ದಲ್ಲಿ ನಿಗಧಿ | 2020–21ನೇ ಸಾಲಿನ ಪರಿಷ್ಕೃತ ಆಯವ್ಯಯ | ಬಿಡುಗಡೆ ಯಾದ ಮೊತ್ತ | ಖರ್ಚಾದ ಮೊತ್ತ ಮಾರ್ಚ್ 2021ರ ಅಂತ್ಯಕ್ಕೆ | ಬಳಕೆಯಾಗದ ಅನುದಾನ |
|---|---|---|---|---|---|---|
| **I** | ರಾಜ್ಯ ವಲಯ | | | | | |
| 1 | ಸಮಾಜ ಸೇವಾ ಸಂಕೀರ್ಣ 2235–02–001–0–03 | 141.00 | 115.50 | 115.50 | 66.17 | 49.33 |
| 2 | ಅಂಗವಿಕಲರಿಗಾಗಿ ನಿರ್ದೇಶನಾಲಯ 2235–02–001–0–05 | 367.00 | 487.68 | 487.68 | 401.64 | 86.04 |
| 3 | ಕಿವುಡು & ಅಂಧ ಮಕ್ಕಳ ಶಾಲೆಗಳ ಅಭಿವೃದ್ಧಿ 2235–02–101–0–02 | 85.00 | 73.19 | 73.19 | 44.57 | 28.62 |
| 4 | ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ ಧನ 2235–02–101–0–05 | 625.00 | 625.00 | 625.00 | 527.97 | 97.03 |
| 5 | ಅಂಗವಿಕಲರ ಅಧಿನಿಯಮ 1995ರ ಮೇರೆಗೆ ಆಯುಕ್ತಾಲಯ 2235–02–101–0–47 | 82.00 | 93.15 | 93.15 | 70.64 | 22.51 |
| 6 | ಮಾನಸಿಕವಾಗಿ ಸವಾಲಿಗೊಳಗಾದವರಿಗೆ ನಿವಾಸಿ ಗೃಹಗಳು 2235–02–101–0–49 | 34.00 | 34.00 | 34.00 | 24.14 | 9.86 |
| 7 | ಮಹಿಳಾ ಅಂಗವಿಕಲರಿಗೆ ಹಾಸ್ಟಲ್‌ಗಳು 2235–02–101–0–50 | 350.00 | 275.00 | 275.00 | 271.54 | 3.46 |
| 8 | ಅಂಗವಿಕಲರಿಗೆ ಸಾಧನ ಸಲಕರಣೆಗಳು 2235–02–101–0–52 | 2220.00 | 2220.00 | 2220.00 | 2117.32 | 102.68 |
| 9 | ಅಂಗವಿಕಲರಿಗೆ ಗ್ರಾಮೀಣ ಪುನರ್ವಸತಿ ಕಾರ್ಯಕ್ರಮ 2235–02–101–0–53 | 4377.00 | 5642.00 | 5642.00 | 4022.25 | 1619.75 |
| 10 | ವಿಕಲಚೇತನರಿಗೆ ಉದ್ಯೋಗ ಕೋಶ 2235–02–101–0–55 | 20.00 | 5.00 | 5.00 | 2.48 | 2.52 |
| 11 | ದೈಹಿಕ ಮತ್ತು ಮಾನಸಿಕ ಸವಾಲಿಗೊಳಗಾದವರ ಕಲ್ಯಾಣ 2235–02–101–0–99 | 2973.00 | 2985.12 | 2985.12 | 2471.31 | 513.81 |
| 12 | ಹಿರಿಯ ನಾಗರಿಕರ ನೀತಿ 2235–02–104–2–04 | 381.00 | 513.17 | 513.17 | 366.08 | 147.09 |
| 13 | ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ವಿಶೇಷ ಶಾಲೆಗಳಿಗೆ ಸಹಾಯಾನುಧಾನ 2235–02–104–2–06 | 6000.00 | 4888.00 | 4888.00 | 4413.27 | 474.73 |
| 14 | ಕಟ್ಟಡಗಳು 4235–02–101–1–01 | 100.00 | 100.00 | 100.00 | 100.00 | 0.00 |
| | **ಒಟ್ಟು ರೂ.** | **17755.00** | **18056.81** | **18056.81** | **14899.38** | **3157.43** |
| **II** | ಜಿಲ್ಲಾ ವಲಯ | | | | | |
| 1 | ಸರ್ಕಾರೇತರ ಸಂಸ್ಥೆ ಗಳಿಗೆ ಸಹಾಯಧನ ವಿಶೇಷ ಶಾಲೆಗಳು 2235–00–101–0–28 | 1617.50 | 1617.50 | 1617.50 | 1617.50 | 0.00 |
| 2 | ಸರ್ಕಾರೇತರ ಸಂಸ್ಥೆ ಗಳಿಗೆ ಸಹಾಯಧನ ವೃದ್ಧಾಶ್ರಮಗಳು 2235–00–101–0–30 | 264.00 | 264.00 | 264.00 | 264.00 | 0.00 |
| | **ಒಟ್ಟು ರೂ.** | **1881.50** | **1881.50** | **1881.50** | **1881.50** | 0.00 |
| | **ಒಟ್ಟು ರೂ. ( I+ II)** | **19636.50** | **19938.31** | **19938.31** | **16780.88** | **3157.43** |

# ಅನುಬಂಧ-04

## ವಿಕಲಚೇತನರಿಗಾಗಿ ರೂಪಿಸಿರುವ ಈಗಿನ ಮತ್ತು ಮುಂದಿನ ಯೋಜನೆಗಳು

### ಈಗಿನ ಯೋಜನೆಗಳು

**(ಎ) ಶೈಕ್ಷಣಿಕ ಯೋಜನೆಗಳು:-**

1. ಶ್ರವಣದೋಷವುಳ್ಳ ಮಕ್ಕಳಿಗಾಗಿ ಸರ್ಕಾರದ ವಸತಿಯುತ ಶಾಲೆಗಳು
2. ಅಂಧ ಮಕ್ಕಳಿಗಾಗಿ ಸರ್ಕಾರದ ವಸತಿಯುತ ಶಾಲೆಗಳು
3. 1982ರ ರಾಜ್ಯ ಅನುದಾನ ಸಂಹಿತೆಯಡಿ ನಡೆಯುತ್ತಿರುವ ವಿಶೇಷ ಶಾಲೆಗಳು
4. ವಿಕಲಚೇತನರಿಗೆ ವೃತ್ತಿ ತರಬೇತಿ ಕೇಂದ್ರಗಳು:
5. ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ
6. ಕೇಂದ್ರ ಸರ್ಕಾರದ ದೀನ್‌ದಯಾಳ್ ಪುನರ್ವಸತಿ ಯೋಜನೆ
7. ಅಂಗವಿಕಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹಧನ
8. ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ಯೋಜನೆ
9. ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ
10. ಬ್ರೈಲ್ ಮುದ್ರಣಾಲಯ
11. ವಿಶೇಷ ಶಿಕ್ಷಣ ತರಬೇತಿ ಕೇಂದ್ರ ಯೋಜನೆ
12. ಮಾನಸಿಕ ಅಸ್ವಸ್ಥ, ಸೆರಬ್ರಲ್ ಪಾಲ್ಸಿ, ಆಟಿಸಂ ಮಕ್ಕಳ ಹಗಲು ಯೋಗಕ್ಷೇಮ ಕೇಂದ್ರಗಳು

**(ಬಿ) ಉದ್ಯೋಗ ಮತ್ತು ತರಬೇತಿ:-**

1. ಅಂಗವಿಕಲ ಪುರುಷ ಹಾಗೂ ಮಹಿಳೆಯರ ವಸತಿನಿಲಯ
2. ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ವಸತಿ ನಿಲಯಗಳು
3. ಗ್ರಾಮೀಣ ಪುನರ್ವಸತಿ ಯೋಜನೆ
4. ಮರಣ ಪರಿಹಾರ ನಿಧಿ ಯೋಜನೆ

**(ಸಿ). ಆರ್ಥಿಕ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳು:-**

1. ಸಮಾಜ ಸೇವಾ ಸಂಕೀರ್ಣ
2. ಮಂದಮತಿ ಮಹಿಳೆಯರ ಅನುಪಾಲನಾ ಗೃಹ
3. ಮಾನಸಿಕ ಅಸ್ವಸ್ಥರಿಗೆ ಮಾನಸ ಕೇಂದ್ರಗಳು
4. ಬುದ್ಧಿಮಾಂದ್ಯ ಮಕ್ಕಳ ಪೋಷಕರಿಗೆ ವಿಮಾ ಯೋಜನೆ
5. ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯರು ಮದುವೆಯಾದಲ್ಲಿ ಪ್ರೋತ್ಸಾಹ ಧನ ನೀಡುವ ಯೋಜನೆ
6. ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಭತ್ಯೆ ಒದಗಿಸುವ ಯೋಜನೆ
7. ನಿರುದ್ಯೋಗ ಭತ್ಯೆ

**(ಡಿ) ಪುನರ್ವಸತಿ ಯೋಜನೆಗಳು:-**

1. ಅಂಗವಿಕಲರಿಗೆ ಸಾಧನ ಸಲಕರಣೆಗಳು
2. ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಯೋಜನೆ
3. ತೀವ್ರತರನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರವಾಹನ ಯೋಜನೆ
4. ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ ಯೋಜನೆ
5. ಅಂಗವಿಕಲತೆಯನ್ನು ನಿವಾರಿಸುವ ಶಸ್ತ್ರಚಿಕಿತ್ಸೆಗಾಗಿ ವೈದ್ಯಕೀಯ ಪರಿಹಾರ ನಿಧಿ ಯೋಜನೆ
6. ಅಂಧ ವಿದ್ಯಾರ್ಥಿಗಳಿಗೆ ಬ್ರೈಲ್ ಕಿಟ್‌ಗಳ ವಿತರಿಸುವ ಯೋಜನೆ
7. ಶ್ರವಣದೋಷವುಳ್ಳ ವ್ಯಕ್ತಿಗಳಿಗೆ ಸ್ವಯಂ ಉದ್ಯೋಗಕ್ಕಾಗಿ ಹೊಲಿಗೆ ಯಂತ್ರವನ್ನು ವಿತರಿಸುವ ಯೋಜನೆ

**(ಇ). ಸಾಧನೆ ಮತ್ತು ಪ್ರತಿಭೆ ಯೋಜನೆ**

**(ಎಫ್). ನಿರಾಮಯ ಆರೋಗ್ಯ ವಿಮಾ ಯೋಜನೆ**

**(ಐ). ಸ್ಪರ್ಧಾ ಚೇತನ ಯೋಜನೆ**

**(ಜೆ). ವಿಕಲಚೇತನರ ವಿಶಿಷ್ಟ ಗುರುತಿನ ಚೀಟಿ ಯೋಜನೆ**

## 2021–22ನೇ ಸಾಲಿನಲ್ಲಿ ಘೋಷಣೆಯಾದ ಯೋಜನೆಗಳು

1. ಹುಟ್ಟಿನಿಂದಲೇ ಶ್ರವಣದೋಷವುಳ್ಳ ಮಕ್ಕಳ ತಾಯಂದಿರಿಗೆ ಪ್ರಾರಂಭಿಕ ಹಂತದಲ್ಲಿಯೇ ಅವರ ಮಗುವಿನ ಸಮಸ್ಯೆ ಮತ್ತು ಪರಿಹಾರದ ಬಗ್ಗೆ ಅರಿವು ಮೂಡಿಸಲು ತರಬೇತಿ ನೀಡುವ ಅವಶ್ಯಕತೆ ಇರುವುದರಿಂದ ನಾಲ್ಕು ವರ್ಷದೊಳಗಿನ ಶ್ರವಣದೋಷವುಳ್ಳ ಮಕ್ಕಳಿಗೆ ಅವರ ತಾಯಂದಿರ ಸಹಿತ ವಾಕ್ (Speech) ತರಬೇತಿ ಯೋಜನೆಯನ್ನು 2021–22ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಕ್ರಮವಹಿಸಲಾಗಿದೆ.
2. ರಾಜ್ಯದಲ್ಲಿನ ವ್ಯಾಸಂಗ ಮಾಡುತ್ತಿರುವ ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳಿಗೆ ಡಿಜಿಟಲ್ ಪುಸ್ತಕಗಳನ್ನು ಒದಗಿಸಲು ಮೈಸೂರಿನಲ್ಲಿ ಸರ್ಕಾರದ ಬ್ರೈಲ್ ಮುದ್ರಣಾಲಯದಲ್ಲಿ 'ಸುಶ್ರಾವ್ಯ" ಡಿಜಿಟಲ್ ಪುಸ್ತಕಗಳ ಬ್ಯಾಂಕನ್ನು 2021–22ನೇ ಸಾಲಿನಲ್ಲಿ ಸ್ಥಾಪಿಸಲು ಕ್ರಮವಹಿಸಲಾಗುತ್ತಿದೆ.